ಕುಂ.ಭಾ. ಸದಾಶಿವಪ್ಪ

# ಹರಪನಹಳ್ಳಿ ಪಾಳೇಗಾರರು ಸ್ಥಾಪಿಸಿದ ಸಂಪ್ರದಾಯಗಳು

ಬಳ್ಳಾರಿ ಜಿಲ್ಲೆಯ ಒಂದು ತಾಲ್ಲೂಕಿನ ಮುಖ್ಯ ಪಟ್ಟಣವಾಗಿರುವ ಹರಪನಹಳ್ಳಿ ಪಟ್ಟಣದಲ್ಲಿ ಈಗಲೂ ಹಳೆಯ ಕಾಲದ ಕಟ್ಟೆಗಳು, ಅವುಗಳ ಮೇಲೆ ಕಲ್ಲಿನ ಬಸವ ಮೂರ್ತಿಗಳು ಕಂಡು ಬರುವುವು. ಈ ಮೂರ್ತಿಗಳು ಉತ್ತರಾಭಿಮುಖವಾಗಿರುವುವು. ಕೆಲವು ಮುರ್ತಿಗಳಿಗೆ ಕೇವಲ ಸುಮಾರು ಅಡಿ ಎತ್ತರದ ಕಲ್ಲು ಕಟ್ಟೆಗಳೇ ಆಧಾರವಾಗಿದ್ದರೆ, ಮತ್ತೆ ಕೆಲವು ಮೂರ್ತಿಗಳಿಗೆ ದೇವಾಲಯಗಳು ಕಂಡು ಬರುವುವು. ಇವುಗಳಲ್ಲಿ ಒಂದು ದೇವಾಲಯ ಅತ್ಯಂತ ಸುಂದರ ಮತ್ತು ಪ್ರಾಚೀನವಾದದ್ದೆಂದು ಗೊತ್ತಾಗುವುದು. ಇದು ಹರಪನಹಳ್ಳಿಯ ಕುರುಬರ ಓಣಿಯಲ್ಲಿರುವುದು. ಜನ ಸಾಮಾನ್ಯರು ಇದಕ್ಕೆ ಅರಸಿನ ಮಠವೆಂದು ಕರೆಯುವರು. ಈ ಅರಸಿನ ಮಠದ ಮುಂದೆ ಪಾವಟಿಕೆಗಳುಳ್ಳ ಒಂದು ನೀರಿನ ಬಾವಿ ಇರುವುದು. ಬಾವಿಯನ್ನು ಒಳಗೊಂಡು ಮಠದ ಮುಂದೆ ಮತ್ತು ಅದರ ಬಲಭಾಗದಲ್ಲಿ ಕಾಣುವ ಮೈದಾನ ಸುಮಾರು ಎರಡು ಎಕರೆ ವಿಸ್ತೀರ್ಣವುಳ್ಳದ್ದಾಗಿದೆ. ಬಾವಿಯ ಮುಂದೆಯೇ ಮಠಕ್ಕೆ ದಾರಿ ಇದೆ. ಮಠದ ಮುಂದೆ ಒಂದು ಓಕಳಿ ಕುಣಿ ಇದ್ದಿತೆಂದೂ ಅದು ಈಗ ಮುಚ್ಚಿದೆ ಎಂದೂ ಜನರು ಹೇಳುವರು. ಮಠ ಸಾಧಾರಣವಿರುವುದು. ಇದರಲ್ಲಿ ಐದು ಭಾಗಗಳನ್ನು ಕಾಣಬಹುದು. ಮೊದಲಿಗೆ ನಮಗೆ ಕಾಣುವುದು ಎತ್ತರವಾದ ಬಸವ ಮೂರ್ತಿ. ಇದು ಗರ್ಭಗೃಹದಲ್ಲಿದೆ. ಆದರೆ ಇದರ ಬಾಗಿಲು ಕಾಣುವುದಿಲ್ಲ. ಇದರ ಮುಂದಿನ ಭಾಗದ ಸಭಾಂಗಣದ ಮೇಲ್ಭಾಗದಲ್ಲಿ ಕಲ್ಲಿನಲ್ಲಿ ಕೆತ್ತಿದ ಸುಂದರವಾದ ನಾಗಬಂಧವಿದೆ. ಬಸವನ ಗರ್ಭಗೃಹದ ಪಕ್ಕದಲ್ಲಿ ಎಡಭಾಗದಲ್ಲಿ ಒಂದು ಗರ್ಭಗೃಹವಿದೆ. ಅದರಲ್ಲಿ ಈಶ್ವರ ದೇವರ ಪೀಠ, ಅದರಲ್ಲಿ ಈಶ್ವರ ಲಿಂಗವಿರುವುದು. ಅದರ ಬಾಗಿಲು ಸೊಗಸಾದ ಚಿತ್ರಗಳನ್ನು ಒಳಗೊಂಡು ಪೂರ್ವ ಕಾಲದ ಚಾಲುಕ್ಯರ ಶಿಲ್ಪವಾಗಿದೆ. ಬಾಗಿಲ ಮೇಲೆ ಗಜಲಕ್ಷ್ಮಿಯ ಚಿತ್ರವಿದೆ. ಬಸವನಿರುವ ಗರ್ಭಗೃಹದ ಬಲಭಾಗದಲ್ಲಿ ಒಂದು ಗರ್ಭಗೃಹವಿದೆ. ಅದರಲ್ಲಿ ದೇವರಿಲ್ಲ. ಅದರ ಬಾಗಿಲು ಕೂಡಾ ಪೂರ್ವಕಾಲದ ಶಿಲ್ಪಕಲೆಯಾಗಿದೆ. ಬಾಗಿಲ ಮೇಲೆ ಗಜಲಕ್ಷ್ಮಿ ಚಿತ್ರ ಇರುವುದು. ಇನ್ನೂ ಎತ್ತರದಲ್ಲಿ ಬಾಗಿಲ ಮೇಲೆ ಸಪ್ತಮಾತೃಕೆಗಳಿರುವುವು. ಈ ಮಠದ ಕಂಬಗಳ ಮೇಲೆ ಆಂಜನೇಯ, ಗಂಡಭೇರುಂಡ, ಬುದ್ಧ, ಶಂಖ ಹಿಡಿದ ಮೂರ್ತಿ, ಉಗ್ರನಾರಸಿಂಹ, ಈಶ್ವರ, ನಾಗಬಂಧ, ಯೋಗಿಗಳು, ಹೂವು ಮುಂತಾದ ಉಬ್ಬು ಚಿತ್ರಗಳು ಕಂಡು ಬರುವುವು. ಬಸವನ ಗರ್ಭಗೃಹಕ್ಕೆ ಬಾಗಿಲು ಇರುವುದಿಲ್ಲ. ಬಸವ ವಿಗ್ರಹದ ಪೀಠ ಕಲ್ಲುಕಟ್ಟೆಯಾದರೆ ಈಶ್ವರನ ಪೀಠ ಮಣ್ಣು ಗರಸಿನ ಕಟ್ಟೆಯಾಗಿದೆ. ಮಠವೆಂದು ಕರೆಯಿಸಿಕೊಳ್ಳುವ ಇನ್ನೂ ಕೆಲವು ಬಸವ ದೇವಾಲಯಗಳು ಇತರ ಕಡೆ ಕಂಡುಬಂದರೂ ವಾಸ್ತುಶಿಲ್ಪದ ದೃಷ್ಟಿಯಿಂದ ಕುರುಬರ ಓಣಿಯಲ್ಲಿರುವ ಈ ದೇವಾಲಯವೇ ಗಮನಾರ್ಹವಾದದ್ದು.

## ವಿಮರ್ಶೆ:

ಹರಪನಹಳ್ಳಿಯನ್ನು ಆಳಿದ 15 ಪಾಳೇಗಾರರಲ್ಲಿ ಬರುವ ಹೆಚ್ಚಿನ ಸಂಖ್ಯೆಯ ಹೆಸರುಗಳು ಹೀಗಿರುವುವು: (1) ಮೊದಲ ಬಸವಂತನಾಯಕ (ಕೊಟ್ಟೂರು ಬಸಪ್ಪನಾಯಕ) (2) ಮರಿಕೊಟ್ರಬಸಪ್ಪನಾಯಕ (3) ಎರಡನೇ ಬಸವಂತನಾಯಕ (4) ಮೊದಲ ವೀರಬಸಪ್ಪನಾಯಕ (5) ಎರಡನೇ ವೀರಬಸಪ್ಪನಾಯಕ (6) ಮುದುಬಸಪ್ಪನಾಯಕ ಮತ್ತು (7) ಬಸಪ್ಪನಾಯಕ

ಹಿಂದಿನ ಕಾಲದ ಅರಸರು ತಾವು ದೇವಾಲಯವನ್ನು ಕಟ್ಟಿಸಿ ಅದರಲ್ಲಿ ಮೂರ್ತಿಯನ್ನು ಸ್ಥಾಪಿಸಿ ಆ ದೇವರಿಗೆ ತಮ್ಮ ಹೆಸರು ಇಲ್ಲವೇ ಬಿರುದನ್ನೇ ಹೆಸರನ್ನಾಗಿ ಇಡುವುದು ಸಂಪ್ರದಾಯ ವಾಗಿದ್ದಿತು. ಅದನ್ನೇ ಈ ಪಾಳೇಗಾರರು ಮುಂದುವರೆಸಿರುವರು. ಉದಾಹರಣೆಗೆ 1) ಹಿರೇ ಕುರುವತ್ತಿ ಶ್ರೀ ಮಲ್ಲಿಕಾರ್ಜುನದೇವರಿಗೆ ಶಾಸನದಲ್ಲಿ ಆಹವ ಮಲ್ಲೇಶ್ವರನೆಂದೂ, 2) ಹಿರೇಹಡಗಲಿ ಗದ್ದೆ ಕಲ್ಲೇಶ್ವರನಿಗೆ ಭೀಮೇಶ್ವರ – ದೇಮೇಶ್ವರನೆಂದೂ, 3) ಬಳ್ಳಾರಿ ಕೋಟೆಯ ಈಶ್ವರ ದೇವರಿಗೆ ಬಲ್ಲಾಳೇಶ ಮಲ್ಲಾರ್ಯಲಿಂಗ ಎಂದೂ ಕರೆಯಲಾಗಿದೆ.

ಬೇಡನಾಯಕರಾದ ಪರಪನಹಳ್ಳಿ ಪಾಳೇಗಾರರ ಇಷ್ಟದೇವರು: 1) ಮೊದಲ ಘಟ್ಟಹನುಮಂತ ದೇವರು, 2) ಉಚ್ಚಂಗಿದುರ್ಗದ ಉಚ್ಚಂಗೆಮ್ಮ, ಹಾಗೂ ವೀರಶೈವರಾದ ಮೇಲೆ ಅವರ ಇಷ್ಟದೇವರು 1) ಕೊಟ್ಟೂರು ಶ್ರೀ. ಗುರುಬಸವೇಶ್ವರ. ಪರಪನಹಳ್ಳಿಯ ಪಾಳೇಗಾರರು ತಮ್ಮ ಸಮಕಾಲೀನ ಅರಸರಿಗೆ ಬರೆದ ಪತ್ರಗಳಲ್ಲಿ ಬಸವನೆಂಬುವ ತಮ್ಮ ಮೊಹರನ್ನು ಉಪಯೋಗಿಸಿರುವರು. ಪರಪನಹಳ್ಳಿ ಮತ್ತು ಹೂವಿನಹಡಗಲಿ ತಾಲ್ಲೂಕುಗಳಲ್ಲಿ "ಬಸಾಪುರ" ಗ್ರಾಮಗಳು ಮತ್ತು ಬಸವ ದೇವಾಲಯಗಳು ಹೆಚ್ಚಾಗಿ ಕಂಡು ಬರುವುವು. ಇವೆಲ್ಲಾ ಪರಪನಹಳ್ಳಿ ಪಾಳೇಗಾರರ ಕಾಲದ ಲ್ಲುಂಟಾದವು. ಉದಾಹರಣೆ:-

(1) ನಿಟ್ಟೂರು ಬಸಾಪುರ (2) ಡಗ್ಗಿ ಬಸಾಪುರ (3) ತುರುಕರ ಬಸಾಪುರ (4) ಐಗಳ ಬಸಾಪುರ (5) ಪರಿವಿ ಬಸಾಪುರ, (6) ನಾಗತಿಬಸಾಪುರ. ಪರಪನಹಳ್ಳಿಯಲ್ಲಿ ಎರಡು ಬಸವ ಕಟ್ಟೆಗಳನ್ನು ಅಗೆದಾಗ ಅವುಗಳ ತಳದಲ್ಲಿ ಮಾನವನ ಒಂದೊಂದು ಅಸ್ಥಿಪಂಜರ ದೊರಕಿದವು.

### ಕುರುಬರ ಓಣಿಯ ಅರಸು ಮಠ

ಪೂರ್ವ ಕಾಲದಲ್ಲಿ ಇದು ಒಂದು ಚಾಲುಕ್ಯರ ದೇವಾಲಯವಿರಬೇಕು. ಈ ಭಾಗದದಲ್ಲಿ ಕಂಡು ಬರುವ ಇತರ ಕಲ್ಲೇಶ್ವರ ದೇವಾಲಯಗಳಂತೆ ಇದೂ ಒಂದಾಗಿರಬೇಕು. ಈಶ್ವರ ದೇವರನ್ನು ತೆಗೆದು ಅದರ ತಳದಲ್ಲಿ ವೀರಬಸಪ್ಪನಾಯಕನ ಶವವನ್ನು ಹೂತು ಅದರ ಮೇಲೆ ದೊಡ್ಡದಾದ ಬಸವನ ಮೂರ್ತಿಯನ್ನು ಸ್ಥಾಪಿಸಿರುವರು. ಅಂದಿನಿಂದ ಈ ದೇವಾಲಯಕ್ಕೆ ಅರಸಿನ ಮಠವೆಂದು ಕರೆದಿರುವರು. ಈ ಮಠದ ಮುಂದೆ ಎತ್ತರದಲ್ಲಿ ಕಲ್ಲು ಮಣ್ಣುಗಳಿಂದ ಕೂಡಿದ ಗೋಸಾವಿ ಗುಡ್ಡಕ್ಕೆ ಹತ್ತಿಕೊಂಡ ಒಂದು ಕಣಿವೆ ಸಾಲು ಇದೆ. ಅಲ್ಲಿ ಒಂದು ಬಸವನ ದೇವಾಲಯವಿರುವುದು. ಅದು ದಕ್ಷಿಣಕ್ಕೆ ಮುಖವಾಗಿದೆ. ಅದಕ್ಕೆ ತೇರು ಬಸವಣ್ಣನೆಂದು ಈಗಲೂ ಕರೆಯುವರು. ತೇರು ಬಸವಣ್ಣನ ಸ್ಥಳದಿಂದ ಈ ಅರಸಿನ ಮಠದವರೆಗೂ ಪೂರ್ವಕಾಲದಲ್ಲಿ ತೇರು ಎಳೆದು ಜಾತ್ರೆ ಮಾಡುತ್ತಿದ್ದುದಾಗಿ ಹಿರಿಯರು ಹೇಳುವರು. ಶಾಲಿವಾಹನ ಶಕ 1664 ರಲ್ಲಿ ಪರಪನಹಳ್ಳಿಯನ್ನು ಆಳಿದ ವೀರಬಸಪ್ಪನಾಯಕನ ಸಮಾಧಿಯೇ ಈ ಅರಸಿನ ಮಠ. ಪಾಳೇಗಾರರಲ್ಲಿ ಸಂಬಂಧಿಕರು, ಸಾಮಾನ್ಯರು, ಮಡಿದರೆ ಅವರ ಶವಗಳನ್ನು ಕೋಟೆಯಹೊರಗೆ ಹುಗಿದು ಅವುಗಳಿಗೆ ಕಲ್ಲಿನ ಕಟ್ಟೆಗಳನ್ನು ಕಟ್ಟಿಸಿ ಅವುಗಳ ಮೇಲೆ ಬಸವನ ಕಲ್ಲಿನ ಮೂರ್ತಿಯನ್ನು ಸ್ಥಾಪಿಸುತ್ತಿದ್ದರು. ಪಾಳೇಗಾರರಲ್ಲಿ ಪ್ರಮುಖ ಅರಸರು ಮಡಿದರೆ ಅವರ ಶವಗಳನ್ನು ಇದೇ ರೀತಿ ಕೋಟೆಯ ಹೊರಗಡೆ ಒಂದು ಸ್ಥಳದಲ್ಲಿ ಹೂತು ಮೇಲೆ ಕಲ್ಲಿನ ಕಟ್ಟೆಯನ್ನು ನಿರ್ಮಿಸಿ ಅದರಲ್ಲಿ ಕಲ್ಲಿನ ಬಸವನ ಮೂರ್ತಿಯನ್ನು ಸ್ಥಾಪಿಸಿ ಅದಕ್ಕೆ ದೇವಾಲಯವನ್ನು ನಿರ್ಮಿಸಿ ಪಕ್ಕದಲ್ಲಿ ಒಂದು ಪಾವಟಿಕೆ, ಬಾವಿ ಮತ್ತು ಹೂತೋಟಗಳನ್ನು ಸ್ಥಾಪಿಸುತ್ತಿದ್ದರು. ಜನರು ಇದಕ್ಕೆ ಅರಸರ ಮಠವೆಂದು ಕರೆಯುತ್ತಿದ್ದರು. (ಈ ವಿಚಾರ ಅದರ ಬಳಿ ಇರುವ ಶಾಸನದಿಂದ ಗೊತ್ತಾಗುವುದು)

ಈ ಸಂಪ್ರದಾಯ ಯಾವಾಗ ಬಂದಿತು? ಇದನ್ನು ಆಚರಣೆಗೆ ತಂದವರಾರು? ಪರಪನಹಳ್ಳಿ ಪಾಳೇಗಾರರಲ್ಲಿ ಕಂಡು ಬರುವ ಬೇಡನಾಯಕ ಮೊದಲ ಬಸವಂತನಾಯಕನು ವೀರಶೈವ ಧರ್ಮವನ್ನು ಸ್ವೀಕರಿಸಿದನು. ಇವನ ಕಾಲ ಕ್ರಿ.ಶ. 1708 ಇವನೇ ಈ ಸಂಪ್ರದಾಯಕ್ಕೆ ಮೂಲ ಪುರುಷನಿರಬೇಕು. ಇವರ ಮೊದಲ ಹೆಸರು ಬಸವಂತನಾಯಕ. ವೀರಶೈವ ಧರ್ಮವನ್ನು ಸ್ವೀಕರಿಸಿದ ಮೇಲೆ ಕೊಟ್ರಬಸಪ್ಪ ನಾಯಕನೆಂದು ಹೆಸರಿಟ್ಟುಕೊಂಡನು. ಕೊಟ್ಟೂರು ಶ್ರೀ ಗುರುಬಸವೇಶ್ವರ ಭಕ್ತನಾದನು. ಈ ನಾಯಕನಿಂದ ಮುಂದೆ ಬಂದ ನಾಯಕರ ಹೆಸರುಗಳು ಹೆಚ್ಚಾಗಿ "ಬಸವ" ಎಂಬುದಾಗಿ ಕರೆಯಲ್ಪಟ್ಟುದ್ದಾಗಿ ಕಂಡು ಬರುವುದು.